# ಕಾರ್ಲ್ ಗಸ್ತಾವ್ ಯೂಂಗ್ (1875-1961)

## ಇಂದಿರಾ ಜೈಪ್ರಕಾಶ್



***

ಯೂಂಗ್ ಸ್ವಿಸ್ ಮನೋವೈದ್ಯ ಮತ್ತು ಮನೋಚಿಕಿತ್ಸಕನಾಗಿದ್ದು ವಿಶ್ಲೇಷಣಾ (Analytical Psychology) ಮನೋವಿಜ್ಞಾನವನ್ನು ಸ್ಥಾಪಿಸಿದ. ಕೆಸವಿಲ್‌ನ ಚರ್ಚ್ ಒಂದರ ಬಡ ಪ್ಯಾಸ್ಟರ್ ಆಗಿದ್ದ ತಂದೆ ಮತ್ತು 'ವಿಚಿತ್ರ' ಸ್ವಭಾವದ ತಾಯಿಯ ನಾಲ್ಕು ಮಕ್ಕಳಲ್ಲಿ ಬದುಕುಳಿದಿದ್ದ ಒಬ್ಬನೇ ಮಗ. ಇವನ ಬಾಲ್ಯದ ಅನುಭವಗಳು ಹಿತಕರವಾಗಿರಲಿಲ್ಲ. ಬೆಸಲ್ ನಲ್ಲಿ ವೈದ್ಯಕೀಯ ವಿದ್ಯಾಭ್ಯಾಸ ಮುಗಿಸಿದವನು ಮನೋವೈದ್ಯ ಕ್ರಾಫ್ಟ್-ಎಬಿಂಗ್‌ನ ಕೃತಿಗಳ ಪ್ರಭಾವಕ್ಕೆ ಒಳಗಾದ. ಹೀಗಾಗಿ ಮನೋವೈದ್ಯನಾಗಿ ತರಬೇತಿ ಹೊಂದಿ ಮುಂದೆ ಜ್ಯೂರಿಕ್ ನಲ್ಲಿ ಕೆಲಸಮಾಡಿದ. ಇವನಿಗೆ ಪ್ರಸಿದ್ಧ ವೈದ್ಯ ಯ್ಯುಜೆನ್ ಬ್ಲಾಲರ್‌ನ ಜೊತೆ ಕೆಲಸ ಮಾಡುವ ಸದವಕಾಶ ಲಭಿಸಿತ್ತು. 1903 ರಲ್ಲಿ ಮನೋವಿಶ್ಲೇಷಣೆಯಲ್ಲಿ ತರಬೇತಿ ಪಡೆದಿದ್ದ ಎಮಾ ರೋಶನ್‌ಬಾಕ್‌ಳನ್ನು ವಿವಾಹವಾಗಿ ಇಬ್ಬರೂ ಒಟ್ಟಿಗೇ ಮನೋವಿಜ್ಞಾನದಲ್ಲಿ ಅಧ್ಯಯನಗಳನ್ನು ಮಾಡಿದರು. ಪ್ರಥಮ ವಿಶ್ವಸಮರದಲ್ಲಿ ಸ್ವಿಟ್ಜರ್‌ಲ್ಯಾಂಡ್ ಅಲಿಪ್ತ ದೇಶವಾಗಿದ್ದರೂ ಇತರ ದೇಶಗಳ ಗಾಯಗೊಂಡ ಸೈನಿಕರ ಸೇವೆಗೆ ನಿಯಮಿಸಿದ್ದ ತಂಡದಲ್ಲಿ ವೈದ್ಯನಾಗಿ ಕೆಲಸಮಾಡಿದ್ದ.

ಯೂಂಗ್ ಮನೋವಿಶ್ಲೇಷಣೆಯಲ್ಲಿ ಅಸಕ್ತಿ ಹೊಂದಿದ್ದು ಫ್ರಾಯ್ಡನೊಡನೆ ಪತ್ರ ವ್ಯವಹಾರ ನಡೆಸುತ್ತಿದ್ದ. 1906 ರಲ್ಲಿ 'ಪದಸಾಹಚರ್ಯ' (word association) ಬಗ್ಗೆ ತನ್ನ ಲೇಖನವನ್ನು ಫ್ರಾಯ್ಡನಿಗೆ ಕಳುಹಿಸಿದ್ದು ಇವರಿಬ್ಬರ ನಡುವೆ ಸ್ನೇಹಕ್ಕೆ ಕಾರಣವಾಯಿತು. 1907 ರಿಂದ 19012 ರ ವರೆಗೆ ಫ್ರಾಯ್ಡನ ಜೊತೆ ನಿಕಟವಾಗಿ ಕೆಲಸಮಾಡಿ ಅವನ ಸಿದ್ಧಾಂತವನ್ನು ಸ್ವಿಟ್ಜರ್‌ಲ್ಯಾಂಡ್‌ನವರಿಗೆ ಪರಿಚಯಿಸಿದ. ಯೂಂಗ್ ಅಮೆರಿಕ, ಇಂಗ್ಲೆಂಡ್ ದೇಶಗಳಲ್ಲಿ ಪ್ರವಾಸ ಮಾಡುತ್ತಿದ್ದು ಮನೋವಿಶ್ಲೇಷಣೆ ಬೇರೆ ದೇಶಗಳಲ್ಲಿ ಹರಡಲು ಕಾರಣನಾದ. ಫ್ರಾಯ್ಡ್ ಸ್ಥಾಪಿಸಿದ್ದ ಸಂಸ್ಥೆಯ ಅಧ್ಯಕ್ಷನೂ ಅಗಿದ್ದ. ಇವನು ಫ್ರಾಯ್ಡನಿಗೆ ಮೊದಲು ಬೆಂಬಲ ನೀಡಿದರೂ ಆನಂತರ ನಿಧಾನವಾಗಿ ಅವರಿಬ್ಬರ ನಡುವೆ

ಭಿನ್ನಾಭಿಪ್ರಾಯಗಳು ಮೂಡಿದವು. ಇವನು ಫ್ರಾಯ್ಡನ ಲೈಂಗಿಕ ಸಿದ್ಧಾಂತ ಮತ್ತು ಸುಪ್ತಚೇತನದ ವಿವರಣೆಯನ್ನು ಪೂರ್ತಿಯಾಗಿ ಒಪ್ಪಲಿಲ್ಲ. ಬದಲಿಗೆ ವರ್ತನೆಗೆ ಆಧ್ಯಾತ್ಮಿಕ ಕಾರಣಗಳಿರುತ್ತವೆ ಎಂದು ವಾದಿಸುತ್ತಿದ್ದ. ಇವನ ಧಾರ್ಮಿಕ ನಂಬಿಕೆಗಳು, ಪುರಾಣ, ಇತಿಹಾಸ ಇವನ್ನೆಲ್ಲಾ ಮನೋವಿಜ್ಞಾನದಲ್ಲಿ ಸೇರಿಸುವುದು ಫ್ರಾಯ್ಡನಿಗೆ ಅಸಹನೀಯವಾಗಿತ್ತು. 1912 ರಲ್ಲಿ 'ಸುಪ್ತಚೇತನದ ಮನೋವಿಜ್ಞಾನ (Psychology of Unconscious)' ಎಂಬ ಪುಸ್ತಕ ಯೂಂಗ್ ಹೊರತಂದಾಗ ಇವರಿಬ್ಬರ ಸ್ನೇಹ ಮುರಿದುಬಿತ್ತು. 1914 ರಲ್ಲಿ ಯೂಂಗ್ ಸೈಕೋಅನಾಲಿಟಿಕ್ ಸೊಸೈಟಿಯಿಂದ ಹೊರಬಿದ್ದು ತನ್ನದೇ ಪಂಥ ಸ್ಥಾಪಿಸಿದ.

ಯೂಂಗನ ಮುಖ್ಯ ಸಂಕಲ್ಪನೆಗಳು ಹೀಗಿವೆ: **ಸಮಷ್ಟಿ ಸುಪ್ತಚೇತನ (Collective Unconscious)**. ಇದು ಒಂದು ಜನಾಂಗದ ಅನುಭವಗಳ ಧಾರೆ. ಮಾನವಜಾತಿ ತನ್ನ ವಿಕಾಸದ ಹಾದಿಯಲ್ಲಿ ಅನುಭವಿಸಿದ ಘಟನೆ, ನೋಡಿದ ದೃಶ್ಯಗಳ ಪಳಿಯುಳಿಕೆ. ಇಂತಹ **ಜನಾಂಗ ಸ್ಮೃತಿ (racial memory)**ಗಳು ನಮ್ಮ ಇಂದಿನ ವರ್ತನೆಯ ಮೇಲೆ ಪ್ರಭಾವಬೀರುತ್ತವೆ. ಹುಟ್ಟಿನಿಂದಲೇ ನಮ್ಮ ಪ್ರಾಚೀನರ ನೆನಪುಗಳು ನಮಗೆ ಬಳುವಳಿಯಾಗಿ ಬಂದು ಎಲ್ಲಾ ಜನಾಂಗ, ಗುಂಪುಗಳನ್ನೂ ಆಂತರಿಕವಾಗಿ ಒಟ್ಟು ಮಾಡುತ್ತದೆ. ಸಾಧಾರಣವಾಗಿ ಎಲ್ಲರಿಗೂ ಕತ್ತಲೆ ಎಂದರೆ ಭಯವಾಗುವುದು, ಅಗೋಚರ ಶಕ್ತಿಯಲ್ಲಿ ನಂಬಿಕೆ ಇರುವುದು, 'ಮಾತೆ' ಎಂಬ ಕಲ್ಪನೆ ಇರುವುದಕ್ಕೆ ಕಾರಣ ಈ **ಪ್ರಾಚೀನರೂಪ (archetypes)**ಗಳು. ಮುಂದೆ ಈ ಸಂಕಲ್ಪನೆಗಳನ್ನು ಟೆಲಿಪಥಿ ಮುಂತಾದ ಅತೀಂದ್ರಿಯ ಘಟನೆಗಳನ್ನು ವಿವರಿಸಲು ಬಳಸಿದ. ಆತ್ಮಗಳು ಅಗೋಚರ ಎಳೆಗಳಿಂದ ಬೆಸೆದಿದ್ದು ಉನ್ನತ ಶಕ್ತಿಯೊಡನೆ ಸಂಪರ್ಕಹೊಂದಿರುತ್ತವೆ ಎಂದು ನಂಬಿದ್ದ.

ಪ್ರಾಚೀನ ರೂಪಗಳು ಸಾವಿರಾರು. ಅವುಗಳಲ್ಲಿ ಕೆಲವು ವಿಶಿಷ್ಟವಾದವು. **ಪರ್ಸೋನಾ (Persona)** ಎನ್ನುವುದು ನಾವು ಸಾಮಾಜಿಕ ನಿಯಮಗಳಿಗೆ ಮತ್ತು ಆಂತರಿಕ ಅಗತ್ಯಗಳಿಗೆ ಹೊಂದಿಕೊಳ್ಳಲು ಧರಿಸುವ ಪಾತ್ರ ಅಥವಾ ಮುಖವಾಡ. ಈ ಮುಖವಾಡ  ವ್ಯಕ್ತಿಯ ವೈಯುಕ್ತಿಕ ಚೇತನ ಮತ್ತು ಸಾಮಾಜಿಕ ನಿರೀಕ್ಷೆಗಳ ನಡುವೆ ಹೊಂದಾಣಿಕೆ ತರುತ್ತದೆ. ಇವನ ಪರ್ಸೋನಾ ಸಂಕಲ್ಪನೆ ಮುಂದೆ ಕಾರ್ಯನಿರ್ವಹಣಾ ಕ್ಷೇತ್ರದಲಿ 'ಕಾರ್ಪೋರೇಟ್ ಪರ್ಸೋನಾ' ಎಂದು ನಿರ್ವಾಹಕನ ಬಗ್ಗೆ ಅಭಿಪ್ರಾಯಗಳನ್ನು ರೂಪಿಸುವ ಸಿದ್ಧಾಂತಗಳಲ್ಲಿ ಬಳಕೆಗೆ ಬಂತು. ವಿಕಾಸದ ಹಾದಿಯಲ್ಲಿ ಮಾನವ ಅನೇಕ ಪ್ರಾಣಿ ರೂಪಗಳನ್ನು ದಾಟಿ ಬಂದಿದ್ದಾನೆ. ಅವನ ಪ್ರಾಣಿ ಜೀವನದ ಹಳೆಯ ನೆನಪುಗಳು, ನೀಚ ಆವೇಗಗಳು **ಛಾಯೆ (shadow)**. ನಮಗೆ ಇಷ್ಟವಿಲ್ಲದೆ ತಿರಸ್ಕರಿಸಿರುವ ಗುಣಗಳು ಛಾಯೆಯಲ್ಲಿರುತ್ತವೆ. ಯೂಂಗ್ ಪ್ರತಿ ಮಾನಸಿಕ ಕ್ರಿಯೆಗೂ ವಿರುದ್ಧವಾದದ್ದು ಇನ್ನೊಂದು ಇರುತ್ತದೆ ಎಂದು ನಂಬಿದ್ದ. ಚೇತನಾವಸ್ಥೆಯಲ್ಲಿ ಅಹಂ ಇದ್ದರೆ, ಅದಕ್ಕೆ ವಿರುದ್ಧವಾಗಿ ಛಾಯೆ ಇರುತ್ತದೆ. ಪುರಷನ ಸುಪ್ತಚೇತನದಲ್ಲಿ ಸ್ತ್ರೀಗುಣಗಳಿರುತ್ತವೆ. ಇಂತಹ ವ್ಯಕ್ತಿತ್ವದ ಎಲ್ಲಾ ಅಂಶಗಳನ್ನು ಒಟ್ಟುಗೂಡಿಸಿ ಸಂಯೋಜಿಸುವುದು ಸ್ವ ಅಥವಾ **ಸ್ವಯಂ (self)**.

ಯೂಂಗ್ ವರ್ತನೆಗೆ ಲೌಕಿಕ ಉದ್ದೇಶಗಳನ್ನು ದಾಟಿದ ಧಾರ್ಮಿಕ ಗುರಿಯಿದೆ ಎಂದು ನಂಬಿದ್ದ. ಆಳದಲ್ಲಿ ಅಡಗಿರುವ ಸಾಮರ್ಥ್ಯವನ್ನು ಶೋಧಿಸಿ ಅವನ್ನು ಸಾಧಿಸಿಕೊಳ್ಳುವುದು ಮಾನವನ ಮುಖ್ಯ ಕರ್ತವ್ಯ. ಈ ಪರಿವರ್ತನೆಯೇ **ವ್ಯಷ್ಟೀಕರಣ (individuation)**.  ಸುಪ್ತಚೇತನದಲ್ಲಿ ಒಂದು ಸೃಜನಾತ್ಮಕ ಶಕ್ತಿಯಿದ್ದು ಅದು ಹೊರಹೊಮ್ಮಲು ಬಯಸುತ್ತಿರುತ್ತದೆ. ಇದೇ ವ್ಯಷ್ಟೀಕರಣದ ಹಿಂದಿನ ಚಾಲಕ ಶಕ್ತಿ, ವಿಶ್ಲೇಷಣಾ ಚಿಕಿತ್ಸೆಯಲ್ಲಿ ಚಿಕಿತ್ಸಕ ಮುಖವಾಡದ ಮೋಸದ ಜಾಲ ಮತ್ತು ಸುಪ್ತಚೇತನದ ಆವೇಗಗಳಿಂದ ವ್ಯಕ್ತಿ ಬಿಡಿಸಿಕೊಂಡು ತನ್ನ ನಿಜಸ್ವರೂಪವನ್ನು ಹಿಂಪಡೆಯಲು (ಅಂದರೆ ವ್ಯಷ್ಟೀಕರಣಕ್ಕೆ) ಸಹಾಯ ಮಾಡುತ್ತಾನೆ. ಇವನ ಇನ್ನೊಂದು ಸಂಕಲ್ಪನೆ '**ಮೇಳೈಸುವಿಕೆ**'

**(synchronicity)**. ಎರಡು ಘಟನೆಗಳು ಆಕಸ್ಮಿಕ ಎನ್ನುವಂತೆ ಒಂದೇ ಸಮಯದಲ್ಲಿ ಘಟಿಸುತ್ತವೆ. ಇವುಗಳಲ್ಲಿ ಕಾರಣ-ಪರಿಣಾಮ ಎಂಬ ಸಂಬಂಧ ಇಲ್ಲದಿದ್ದರೂ ಅರ್ಥಪೂರ್ಣ ಸಂಬಂಧವಿರುತ್ತದೆ. ಈತ ವುಲ್ಫ್ ಗ್ಯಾಂಗ್ ಪಾಲಿ ಎಂಬ ಭೌತವಿಜ್ಞಾನಿಯೊಡನೆ ಈ ವಿಷಯದಲ್ಲಿ ಭೌತಾತೀತ ಅಧ್ಯಯನ ನಡೆಸಿದ. ಇದರ ಆಧಾರದ ಮೇಲೆ ಭೌತಿಕ ಮತ್ತು ಆಧ್ಯಾತ್ಮಿಕ ಎರಡೂ ಒಂದೇ ವಿಷಯದ ಎರಡು ಆಯಾಮಗಳು ಎಂಬ ತೀರ್ಮಾನಕ್ಕೆ ಯೂಂಗ್ ಬಂದ.

ಈತನ ಚಿಂತನೆಯನ್ನು 'ಕಾಂಪ್ಲೆಕ್ಸ್ ವಾದ' ಎಂದೂ ಕೆಲವು ಕಾಲ ವರ್ಣಿಸಲಾಗಿತ್ತು**. ಕಾಂಪ್ಲೆಕ್ಸ್** ಎನ್ನುವ ಪದ ಈತ ಸಂವೇಗಗಳಿಂದ ತುಂಬಿ ತುಡಿಯುತ್ತಿರುವ ಭಾವನೆಗಳು ಮತ್ತು ಮನೋಬಿಂಬಗಳನ್ನು ವರ್ಣಿಸಲು ಉಪಯೋಗಿಸಿದ. ಇವು ಮನಸಿನಾಳದಲ್ಲಿರುವ 'ಗಂಟು' ಅಥವಾ 'ಗ್ರಂಥಿಗಳು'. ಕನಸನ್ನು ನೇಯುವ ಎಳೆಗಳು, 'ಸ್ವ'-ದ ಕಟ್ಟಡದ ಇಟ್ಟಿಗೆಗಳು, ಮತ್ತು ಮಾನವನ ಸಂವೇಗಗಳ ಮೂಲ. ಇವು ಸ್ಮೃತಿ ಮತ್ತು ಚೇತನವನ್ನು ವಿಚಲಿತಗೊಳಿಸಬಹುದು. ಅನೇಕ ಕಾಂಪ್ಲೆಕ್ಸಗಳು ಇದ್ದು ಅವುಗಳಲ್ಲಿ ಅನಿಮ ಮತ್ತು ಅನಿಮಸ್ ಮುಖ್ಯವಾದದ್ದು. ವ್ಯಕ್ತಿತ್ವದಲ್ಲಿ ಪುರುಷ ಮತ್ತು ಸ್ತ್ರೀಸಹಜ ಗುಣಗಳು ಇರುತ್ತವೆ. ಒಂದು ಗುಣ ಮೇಲ್ಮೈ ಸಾಧಿಸಿ, ಇನ್ನೊಂದು ಅವ್ಯಕ್ತವಾಗಿರುತ್ತದೆ. ಪುರುಷನಲ್ಲಿ ಸುಪ್ತವಾಗಿರುವ ಸ್ತ್ರೀಗುಣ- **ಅನಿಮಾ (Anima)**, ಹೆಣ್ಣಿನಲ್ಲಿ ಅಡಗಿರುವ ಪುರುಷಗುಣ, **ಅನಿಮಸ್ (Animus)**. ಯೂಂಗ್, ಮಾತೆ, ಪಿತ, ನಾಯಕ ಮುಂತಾಗಿ ಅನೇಕ ಕಾಂಪ್ಲೆಕ್ಸ್ ಗಳು ಇರುತ್ತವೆ ಎಂದಿದ್ದ. ಇವು ವರ್ತನೆಯ ಮೇಲೆ ಬಹಳ ಪ್ರಭಾವ ಹೊಂದಿರುತ್ತವೆ.

ಯೂಂಗ್ ವ್ಯಕ್ತಿತ್ವದಲ್ಲಿ **ಅಂತಮುರ್ಖತೆ- ಬಹಿರ್ಮುಖತೆ (Extraversion, Introversion)** ಎಂದು ಎರಡು ಪ್ರರೂಪಗಳನ್ನು ಗುರುತಿಸಿದ. ತನ್ನ ಮನಸ್ಸಿನೊಳಗಿನ ಚಟುವಟಿಕೆಗಳ ಮೇಲೆ ಗಮನವಿರಿಸುವ ಅಭಿವೃತ್ತಿ- ಅಂತರ್ಮುಖತೆ. ತಮ್ಮೊಳಗಿನ ಕನಸುಗಳು, ಕಲ್ಪನೆಗಳು, ಭಾವನೆಗಳಲ್ಲಿ ಇಂತಹವರು ಆರ್ಥಕಂಡುಕೊಳ್ಳುತ್ತಾರೆ. ಹೊರಗಿನ ವಿಷಯಗಳಲ್ಲಿ ಆಸಕ್ತಿ ಮತ್ತು ಗಮನವಿರಿಸುವ ಅಭಿವೃತ್ತಿ- ಬಹಿರ್ಮುಖತೆ. ಬಾಹ್ಯ ಪ್ರಪಂಚದ ಜನ, ವಸ್ತು, ಘಟನೆಗಳು ಇಂತಹವರಿಗೆ ಹೆಚ್ಚು ಅರ್ಥಪೂರ್ಣ. ಇಂತಹ ವ್ಯಕ್ತಿತ್ವ ಪ್ರರೂಪಗಳು ಸಾಧಾರಣವಾಗಿ ಹುಟ್ಟಿನಿಂದಲೇ ಬಂದಿದ್ದರೂ ಪರಿಸರದ ಪ್ರಭಾವಕ್ಕೂ ಒಳಗಾಗುತ್ತವೆ. ಪ್ರಪಂಚವನ್ನು ಆಲೋಚನೆ, ಭಾವನೆ, ಸಂವೇದನೆ ಮತ್ತು ಅಂತಃಪ್ರಜ್ಞೆ ಎಂದು ನಾಲ್ಕು ಕ್ರಿಯೆಗಳ ಮೂಲಕ ಅರಿತುಕೊಳ್ಳುತ್ತೇವೆ. ವ್ಯಕ್ತಿತ್ವದಲ್ಲಿರುವ ಒಳ್ಳೆಯ-ಕೆಟ್ಟ; ಜಾಗೃತ-ಅಜಾಗೃತ; ಇಂದಿನ-ಪ್ರಾಚೀನ; ಅಂತರ್ಮುಖ-ಬಹರ್ಮುಖ; ಹೀಗೆ ವೈರುಧ್ಯಗಳು, ಸ್ತ್ರೀ-ಪುರಷ ಎಂದು ಪೂರಕಗಳು ಇವನ್ನೆಲ್ಲಾ ಸಮಗ್ರಗೊಳಿಸುವುದು **ವ್ಯಷ್ಟೀಕರಣ**. ಇದು ವ್ಯಕ್ತಿಯನ್ನು ಶಾಂತ ಹಾಗೂ ಸೃಜನಾತ್ಮಕವಾಗಿಸುತ್ತದೆ. ದೈಹಿಕ ಮಾನಸಿಕ ಆರೋಗ್ಯ ಉತ್ತಮಗೊಳುವುದಲ್ಲದೆ, ವ್ಯಷ್ಟೀಕರಣ ಹೊಂದಿದ ಜನರು ಸಾಮರಸ್ಯ, ವಿವೇಕ, ಪಕ್ವತೆ ಮುಂತಾದ ಗುಣಗಳನ್ನು ಹೊಂದಿರುತ್ತಾರೆ.

ಕನಸುಗಳು ನಮ್ಮೊಳಗಿನ ವ್ಯಕ್ತಿತ್ವಘಟಕಗಳನ್ನು ನಾವು ಸಂಪರ್ಕಿಸುವ ಮಾರ್ಗ. ಕನಸುಗಳು ಸುಪ್ತಚೇತನಕ್ಕೆ ಕಿಟಕಿಗಳು. ಅವು ಜಾಗೃತಾವಸ್ಥೆಯಲ್ಲಿ ನಮಗಿರುವ ಸಮಸ್ಯೆಗಳಿಗೆ ಉತ್ತರ ಹುಡುಕಲು ಸಹಾಯ ಮಾಡುತ್ತವೆ. ನಮ್ಮ ವ್ಯಕ್ತಿತ್ವದ ಸಂಪೂರ್ಣತೆಗೆ ಜಾಗೃತ ಮನಸ್ಸಿಗೆ ಮಾರ್ಗದರ್ಶನ ಮಾಡುತ್ತವೆ. ಚೇತನ ಮತ್ತು ಸುಪ್ತಚೇತನಗಳನ್ನು ಒಂದಾಗಿ ಸಂಯೋಜಿಸಲು ಕನಸುಗಳು ಮತ್ತು **"ಮಂಡಲ (Mandala)"**ಗಳ ಚಿತ್ರಗಳನ್ನು ಇವನು ಬಳಸಿದ. ಹಿಂದೂ ಮತ್ತು ಬೌದ್ಧ ಧಾರ್ಮಿಕವಿಧಿಗಳಲ್ಲಿ ಚೌಕಾಕಾರದ ಮಧ್ಯೆ ವೃತ್ತವಿರುವ ಮಂಡಲಗಳನ್ನು ರಚಿಸುವ ಹಿನ್ನೆಲೆ ಇದೆ. ಮಂಡಲಗಳು 'ಮ್ಯಾಜಿಕ್ ಸರ್ಕಲ್ಸ್' (Magic circles-ಯಕ್ಷಿಣಿ ವೃತ್ತಗಳು)-ಇವು ಎಲ್ಲಾ ದೇಶ, ಕಾಲ, ಸಂಸ್ಕೃತಿಯಲ್ಲಿ ಕಾಣುವ ಮೂಲ ಆಶಯಗಳು (motifs). ಮಂಡಲವನ್ನು ಚಿತ್ರಿಸಿದಾಗ ಅದು ವ್ಯಕ್ತಿಯ ಮನಸ್ಸಿನ

ಸ್ಥಿತಿಯನ್ನು ರಹಸ್ಯ ಸಂಕೇತಗಳ ಮೂಲಕ ಹೊರಹಾಕುತ್ತದೆ. ಮಂಡಲಗಳು ಕನಸಿನಲ್ಲಿ, ಅತಿಕ್ಷುಬ್ಧ ಮನೋವಿಕೃತಿಯ ಅಥವಾ ಭೀತಿಯ ಮನಸ್ಥಿತಿಯಲ್ಲಿ ಕಾಣಿಸಿಕೊಳ್ಳುತ್ತವೆ ಎಂದು ಯೂಂಗ್ ನಂಬಿದ್ದ.

ಯೂಂಗನದು ವರ್ಣಮಯ ವ್ಯಕ್ತಿತ್ವ. ಈತ ತನ್ನ ಮಹಿಳಾ ಸಹೋದ್ಯೋಗಿಗಳು, ಶಿಷ್ಯೆಯರ ಜೊತೆ ಸಂಬಂಧವಿರಿಸಿಕೊಂಡಿದ್ದ ಎಂಬ ವದಂತಿಯೂ ಇತ್ತು. ಇವನಿಗೆ ರಸವಿದ್ಯೆ, ಕಬಾಲಾ, ಅತೀಂದ್ರಿಯ ಘಟನೆಗಳಲ್ಲಿ ಆಸಕ್ತಿ ಇತ್ತು. ತನ್ನ ಕೊನೆಗಾಲದಲ್ಲಿ 'ಹಾರುವ ತಟ್ಟೆ (Flying Saucers)'ಗಳ ಬಗ್ಗೆ ಯೂಂಗ್ ಬರೆದಿದ್ದ. ಮುಂದೆ ಇವನ ವ್ಯಕ್ತಿತ್ವ ಪ್ರರೂಪಗಳನ್ನು ವಿಸ್ತರಿಸಿ ಮತ್ತು ಮಾರ್ಪಡಿಸಿ ಐಸೆಂಕ್ ತನ್ನದೇ ಆದ ಸಿದ್ಧಾಂತ ಮಂಡಿಸಿದ. ಮೈಯರ್ಸ್-ಬ್ರಿಗ್ಸ್ ಟೈಪ್ ಇಂಡಿಕೇಟರ್, ಕಿಯರ್ಸೆ-ಬೇಟ್ಸ್ ಟೆಂಪರಮೆಂಟ್ ಸಾರ್ಟರ್, ಯೂಂಗ್ ಟೈಪಾಲಜಿ ಟೆಸ್ಟ್ ಮುಂತಾದ ಮನೋಮಾಪನಗಳು ಇವನ ಸಿದ್ಧಾಂತದ ಆಧಾರದ ಮೇಲೆ ತಯಾರಾದವು. ಈಗಲೂ ಪದಸಾಹಚರ್ಯ ವಿಧಾನ ಮಾನಸಿಕ ಭಾವಗ್ರಂಥಿಗಳನ್ನು ಗುರುತಿಸಲು ಉಪಯೋಗದಲ್ಲಿದೆ. ಜ್ಯುರಿಕ್‌ನಲ್ಲಿರುವ ಯೂಂಗನ ಸಂಸ್ಥೆಯಲ್ಲಿ ತರಬೇತಿಪಡೆದ ಜೇಮ್ಸ್ ಹಿಲ್‌ಮನ್ 'ಆರ್ಕಿಟೈಪಲ್ ಸೈಕಾಲಜಿ (Archetypal Psychology)' ಎಂಬ ಅಧ್ಯಯನ ಪ್ರಾರಂಭಿಸಿದ. ಧಾರ್ಮಿಕ ಮನೋವಿಜ್ಞಾನ, ಕಲಾಚಿಕಿತ್ಸೆ ಮುಂತಾದವು ಇವನ ವಾದಗಳಿಂದ ಉತ್ತೇಜನ ಪಡೆದವು. 1961ರಲ್ಲಿ ಇವನು ಸಾಯುವ ಮುನ್ನ ಬರೆದ 'ಅಪ್ರೋಚ್ ಟು ಅನ್ ಕಾನ್ಷಿಯಸ್ (Approach to Unconscious)' ಇವನ ಮರಣಾನಂತರ ಪ್ರಕಟವಾಯಿತು.

***